# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 135 |
| ಸದಸ್ಯರ ಹೆಸರು | ಶ್ರೀ ಎಸ್ ವ್ಹಿ ಸಂಕನೂರ |
| ಉತ್ತರಿಸುವ ದಿನಾಂಕ | 16-02-2022 |
| ಉತ್ತರಿಸುವವರು | ಮಾನ್ಯ ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಗದಗನ ಪುರಾತನವಾದ ವೀರನಾರಾಯಣ ಗುಡಿಯ ಆಡಳಿತವನ್ನು ಯಾರು ನಿರ್ವಹಿಸುತ್ತಿದ್ದಾರೆ: (ಮಾಹಿತಿ ನೀಡುವುದು) | ಗದಗಿನ ಪುರಾತನವಾದ ಶ್ರೀ ವೀರನಾರಾಯಣ ಗುಡಿಯು ಧಾರ್ಮಿಕ ದತ್ತಿ ಇಲಾಖೆಯ ಪ್ರವರ್ಗ "ಸಿ" ಶ್ರೇಣಿಯ ದೇವಾಲಯವಾಗಿದ್ದು ಹಾಗೂ ರಾಜ್ಯ ಪುರಾತತ್ವ ಇಲಾಖೆಯ ವ್ಯಾಪ್ತಿಗೆ ಒಳಪಟ್ಟ ಸಂಸ್ಥೆಯಾಗಿರುತ್ತದೆ.<br>ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ನಿಯಮಗಳು, 2002ರ ನಿಯಮ (3)ರ ಅನ್ವಯ ಉಪವಿಭಾಗಾಧಿಕಾರಿ, ಗದಗ ಉಪವಿಭಾಗ ರವರು ಸದರಿ ಅಧಿಸೂಚಿತ ಸಂಸ್ಥೆಯ ನಿಯಮಿಸಲಾದ ಪ್ರಾಧಿಕಾರಿ ಆಗಿರುತ್ತಾರೆ. |
| ಆ) | ಗದಗ ವೀರನಾರಾಯಣ ದೇವರ ಗುಡಿಯ ಒಟ್ಟು ಆಸ್ತಿ ಎಷ್ಟು: (ಸರ್ವೆ ನಂಬರ್ ಸಹಿತ ಒಟ್ಟು ಆಸ್ತಿಯ ವಿವರ ನೀಡುವುದು) | ಗದಗ ಶ್ರೀ ವೀರನಾರಾಯಣ ದೇವರ ಗುಡಿಗೆ ಸೇರಿದ ಆಸ್ತಿಗಳ ವಿವರ ಈ ಕೆಳಕಂಡಂತಿದೆ.<br>ರಿ.ಸ.ನಂ: 96 — 20-34; 97 — 19-29; 98 — 20-00; 99 — 26-38; **ಒಟ್ಟು — 87-21** (ಕ್ಷೇತ್ರ (ವಿಸ್ತೀರ್ಣ ಎ/ಗು))<br>ಅಲ್ಲದೇ ಸದರಿ ದೇವಾಲಯಕ್ಕೆ ಸಂಬಂಧಿಸಿದಂತೆ ಸಿ.ಟಿ.ಎಸ್. ನಂ-555/1, 555/2 ಎ, 555/3ಎ, 555/4, 555/5, 555/13, 630/1, 630/2ಎ, 630/3 ಎ, 630/4, 631, 631/ಎ/3, 631/ಎ+631/ಎ1, 631/ಎ2+631/ಬಿ/1, 631ಎ+631ಎ/1, 631/ಎ2+631/ಬಿ/3, 631/ಸಿ, 632ಎ/1, 632ಎ/2, 632ಬಿ, ರಿ.ಸ.ನಂ:96,97,98, 99 ಅಸ್ತಿಗಳು ಇರುವುದಾಗಿ ಜಿಲ್ಲಾಧಿಕಾರಿ, ಗದಗ ರವರು ತಿಳಿಸಿರುತ್ತಾರೆ. |

Table within answer ಆ):

| ರಿ.ಸ.ನಂ | ಕ್ಷೇತ್ರ (ವಿಸ್ತೀರ್ಣ ಎ/ಗು) |
|---|---|
| 96 | 20-34 |
| 97 | 19-29 |
| 98 | 20-00 |
| 99 | 26-38 |
| **ಒಟ್ಟು** | **87-21** |

| | | |
|---|---|---|
| ಇ) | ಈ ದೇವಸ್ಥಾನದ ಒಟ್ಟು ಆಸ್ತಿಯು ಯಾರ ಕಬ್ಜಾದಲ್ಲಿ ಇರುವುದು: (ಮಾಹಿತಿ ನೀಡುವುದು) | ಈ ದೇವಸ್ಥಾನದ ಒಟ್ಟು ಆಸ್ತಿಯು ಶ್ರೀ ವೀರ ನಾರಾಯಣ ಮತ್ತು ಶ್ರೀ ತ್ರಿಕೂಟೇಶ್ವರ ದೇವಸ್ಥಾನಕ್ಕೆ ಈ ಹಿಂದಿನ ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯಿದೆ 1950ರ ಅಡಿಯಲ್ಲಿ ರಚನೆಯಾಗಿರುವ ಪಂಚ ಕಮಿಟಿ ಗದಗ ಇವರ ಕಬ್ಜಾದಲ್ಲಿ ಇದೆ. |
| ಈ) | ವೀರನಾರಾಯಣ ದೇವರ ಗುಡಿಯ ಆಸ್ತಿಯನ್ನು ಜನರ ವಾಸಕ್ಕಾಗಿ ಭೂ ಬಾಡಿಗೆ ಮೇಲೆ ಕೊಟ್ಟಿರುವುದು ನಿಜವೇ: ಹಾಗಿದ್ದಲ್ಲಿ, ಎಷ್ಟು ವರ್ಷಗಳಿಂದ ಭೂ ಬಾಡಿಗೆ ನೀಡುತ್ತಾ ಬರಲಾಗಿದೆ: (ವಿವರವಾದ ಮಾಹಿತಿ ನೀಡುವುದು) | ಶ್ರೀ ವೀರ ನಾರಾಯಣ ದೇವರ ಗುಡಿಗೆ ಸೇರಿದ ಸಿ.ಟಿ.ಎಸ್. ನಂ-555/1, 555/2 ಎ, 555/3ಎ, 555/4, 555/5, 555/13, 630/1, 630/2ಎ, 630/3 ಎ, 630/4, 631, 631/ಎ/3, 631/ಎ+631/ಎ1, 631/ಎ2+631/ಬಿ/1, 631ಎ+631ಎ/1, 631/ಎ2+ 631/ಬಿ/3, 631/ಸಿ, 632ಎ/1, 632ಎ/2, 632ಬಿ, ರಿ.ಸ.ನಂ:96,97,98, 99ರ ಆಸ್ತಿಗಳನ್ನು ಈ ಹಿಂದೆ ಭೂ ಬಾಡಿಗೆಗೆ ನೀಡಲಾಗಿದ್ದು, ಭೂ ಬಾಡಿಗೆ ಮೊತ್ತವು ಕಡಿಮೆಯಾಗಿದ್ದರಿಂದ ಸದರಿ ಆಸ್ತಿಗಳನ್ನು ಮಾರಾಟ ಮಾಡಲು ಈ ಹಿಂದಿನ ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯಿದೆ 1950ರ ಅಡಿಯಲ್ಲಿ ಧರ್ಮ ದತ್ತಿ ಆಯುಕ್ತರು,ಬೆಳಗಾವಿ ಇವರು ದಿನಾಂಕ:18.09.1993ರಂದು ಅನುಮತಿ ನೀಡಿರುತ್ತಾರೆ.<br><br>ಸದರಿ ಆದೇಶದಂತೆ ದೇವಸ್ಥಾನಕ್ಕೆ ಸೇರಿದ ಆಸ್ತಿಗಳನ್ನು ಮಾರಾಟ ಪ್ರಕ್ರಿಯೆಯ ವಿರುದ್ಧ ಗದಗಿನ ಜಿಲ್ಲಾ ಮತ್ತು ಸೆಷನ್ ನ್ಯಾಯಾಲಯದಲ್ಲಿ ಶ್ರೀ ರಮೇಶಚಾರ್ಯ ತಂದೆ ಮಾಧವಚಾರ್ಯ ಗುಡಿ ಇವರು ಪ್ರಕರಣ ಸಂಖ್ಯೆ:ಎಂ.ಎ.3/2012ನ್ನು ದಾಖಲು ಮಾಡಿದ್ದು, ಸದರಿ ಪ್ರಕರಣವು ಇತ್ಯರ್ಥಕ್ಕೆ ಬಾಕಿಯಿರುತ್ತದೆ.<br><br>ಸದರಿ ಪ್ರಕರಣವು ಇತ್ಯರ್ಥಗೊಂಡ ನಂತರ ಪ್ರಕರಣದ ತೀರ್ಪನ್ನು ಪರಿಶೀಲಿಸಿ ದೇವಸ್ಥಾನದ ಆಸ್ತಿಯ ಬಗ್ಗೆ ಮುಂದಿನ ಕ್ರಮವಹಿಸಲಾಗುವುದು. |
| ಉ) | ದೇವಸ್ಥಾನದ ಆಸ್ತಿಯನ್ನು ಸಾರ್ವಜನಿಕರಿಗೆ ಮಾರಾಟ ಮಾಡಲಾಗಿದೆಯೇ: (ಮಾಹಿತಿ ನೀಡುವುದು) | ಶ್ರೀ ವೀರ ನಾರಾಯಣ ದೇವರ ಗುಡಿಗೆ ಸೇರಿದ ಸಿ.ಟಿ.ಎಸ್. ನಂ-555/1, 555/2 ಎ, 555/3ಎ, 555/4, 555/5, 555/13, 630/1, 630/2ಎ, 630/3 ಎ, 630/4, 631, 631/ಎ/3, 631/ಎ+631/ಎ1, 631/ಎ2+631/ಬಿ/1, 631ಎ+631ಎ/1, 631/ಎ2+631/ಬಿ/3, 631/ಸಿ, 632ಎ/1, 632ಎ/2, 632ಬಿ, ರಿ.ಸ.ನಂ: 96,97,98, 99ರ ಆಸ್ತಿಗಳನ್ನು |

| | | |
|---|---|---|
| | | ಮಾರಾಟ ಮಾಡಲು ಈ ಹಿಂದಿನ ಹಿಂದಿನ ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯಿದೆ 1950ರ ಅಡಿಯಲ್ಲಿ ಧರ್ಮ ದತ್ತಿ ಆಯುಕ್ತರು, ಬೆಳಗಾವಿ ಇವರು ದಿನಾಂಕ:18.09.1993ರಂದು ಅನುಮತಿ ನೀಡಿರುತ್ತಾರೆ.<br><br>ಸದರಿ ಆದೇಶದಂತೆ ದೇವಸ್ಥಾನಕ್ಕೆ ಸೇರಿದ ಆಸ್ತಿಗಳನ್ನು ಮಾರಾಟ ಪ್ರಕ್ರಿಯೆಯ ವಿರುದ್ಧ ಗದಗಿನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಲಯದಲ್ಲಿ ಶ್ರೀ ರಮೇಶಚಾರ್ಯ ತಂದೆ ಮಾಧವಚಾರ್ಯ ಗುಡಿ ಇವರು ಪ್ರಕರಣ ಸಂಖ್ಯೆ:ಎಂ.ಎ.3/2012ನ್ನು ದಾಖಲು ಮಾಡಿದ್ದು, ಸದರಿ ಪ್ರಕರಣವು ಇತ್ಯರ್ಥಕ್ಕೆ ಬಾಕಿಯಿರುತ್ತದೆ. |
| ಊ) | ದೇವಸ್ಥಾನಗಳ ಆಡಳಿತ ನಿರ್ವಹಣೆಗಾಗಿ ಸರ್ಕಾರದಿಂದ ಅನುದಾನ ನೀಡಲಾಗುತ್ತಿದೆಯೇ? (ವಿವರ ನೀಡುವುದು) | ದೇವಸ್ಥಾನಗಳ ಆಡಳಿತ ನಿರ್ವಹಣೆಗಾಗಿ ಸರ್ಕಾರದಿಂದ ವಾರ್ಷಿಕ ರೂ.48,000-00 ಗಳ ತಸ್ತೀಕ್ ಭತ್ಯೆಯನ್ನು ನೀಡಲಾಗುತ್ತಿದೆ. |

ಸಂಖ್ಯೆ: ಕಂಇ 06 ಮುಸಪು 2022

(ಶಶಿಕಲಾ. ಅ. ಜೊಲ್ಲೆ)
ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು